## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 599 |
| ಉತ್ತರಿಸಬೇಕಾಗಿರುವ ದಿನಾಂಕ | : | 17.12.2021 |
| ಸದಸ್ಯರ ಹೆಸರು | : | ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | : | ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತುಕ್ರೀಡಾ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯಾದ್ಯಂತ ಯುವ ಸಬಲೀಕರಣ ಕೇಂದ್ರಗಳನ್ನು ಸ್ಥಾಪಿಸಲಾಗಿದೆಯೇ; ರಾಜ್ಯದ ಯಾವ ಯಾವ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸಲಾಗಿದೆ; (ವಿವರ ನೀಡುವುದು) | ಹೌದು, ಯುವ ಸಬಲೀಕರಣ ಕೇಂದ್ರ (ಯುವ ಸ್ಪಂದನ ಕೇಂದ್ರ)ವನ್ನು ರಾಜ್ಯದ 30 ಜಿಲ್ಲೆಯಲ್ಲಿ ಇಲಾಖೆಯ ಕ್ರೀಡಾಂಗಣಗಳಲ್ಲಿ ತೆರೆಯಲಾಗಿದೆ. |
| (ಆ) | ಯುವ ಸಬಲೀಕರಣ ಕೇಂದ್ರಗಳ ಗುರಿ ಮತ್ತು ಉದ್ದೇಶಗಳೇನು; ಈ ಯೋಜನೆಗಾಗಿ ಸರ್ಕಾರವು ಒದಗಿಸುತ್ತಿರುವ ಅನುದಾನವೆಷ್ಟು; (ವಿವರ ನೀಡುವುದು) | ಯುವ ಸಬಲೀಕರಣ ಕೇಂದ್ರ (ಯುವ ಸ್ಪಂದನ ಕೇಂದ್ರ)ವು ಕೆಳಕಾಣಿಸಿದಂತೆ ಗುರಿ ಮತ್ತು ಉದ್ದೇಶಗಳನ್ನು ಹೊಂದಿರುತ್ತದೆ :-<br>ಯುವ ಜನರು ಸಬಲರಾಗಲು, ಅವರು ತಮ್ಮಲ್ಲಿನ ಸಾಮರ್ಥ್ಯಗಳನ್ನು ಕಂಡುಕೊಳ್ಳುವಲ್ಲಿ ಅಗತ್ಯ ಪೂರಕ ವಾತಾವರಣ ಮತ್ತು ಸೌಲಭ್ಯಗಳನ್ನು ಒದಗಿಸುವುದು.<br>ಯುವ ಜನರು ತಮ್ಮ ಜ್ಞಾನ, ಕೌಶಲ್ಯ, ಸ್ವಭಾವ ಮತ್ತು ನಡವಳಿಕೆಯನ್ನು ಉನ್ನತೀಕರಿಸಿಕೊಳ್ಳಲು ತಮ್ಮನ್ನು ಧನಾತ್ಮಕವಾಗಿ ಬದಲಾಯಿಸಿಕೊಳ್ಳುವಂತೆ ಮಾಡುವುದು.<br>ಯುವಜನರು ತಮ್ಮ ಪ್ರತಿಭೆ ಮತ್ತು ಸಾಮರ್ಥ್ಯಕ್ಕೆ ಸೂಕ್ತವಾದ ಶಿಕ್ಷಣ ಹಾಗೂ ಕೌಶಲ್ಯಗಳನ್ನು ಪಡೆಯಲು ಅಗತ್ಯವಾದ ಸಂಪರ್ಕ ಸೇತುವಾಗಿ ಕಾರ್ಯನಿರ್ವಹಿಸುವುದು.<br>ಯುವಜನ ಅಭಿವೃದ್ಧಿಗಾಗಿ ಇರುವ ಎಲ್ಲಾ ಕಾರ್ಯಕ್ರಮಗಳ ಪ್ರಯೋಜನ ಪಡೆಯಲು ಯುವಜನರಿಗೆ ಏಕಗವಾಕ್ಷಿ ಕೇಂದ್ರವಾಗಿ ಕಾರ್ಯನಿರ್ವಹಿಸುವುದು.<br>ಈ ಯುವ ಸ್ಪಂದನ ಕಾರ್ಯಕ್ರಮದಡಿ ಯುವಜನರ ಮಾನಸಿಕ ಆರೋಗ್ಯವನ್ನು ಸದೃಢಗೊಳಿಸಲು ಮತ್ತು ಜೀವನ ಕೌಶಲ್ಯಾಯಭಿವೃದ್ಧಿ ಕಾರ್ಯಕ್ರಮವನ್ನು ನಿಮ್ಹಾನ್ಸ್ ಸಂಸ್ಥೆಯ ಸಹಯೋಗದಲ್ಲಿ ಅನುಷ್ಠಾನಗೊಳಿಸಲು 2021-22 ನೇ ಸಾಲಿಗೆ ರೂ. 250.00 ಲಕ್ಷ ಅನುದಾನವನ್ನು ನಿಮ್ಹಾನ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ. |

| | | |
|---|---|---|
| (ಇ) | ರಾಜ್ಯದ ಜಿಲ್ಲೆಗಳಲ್ಲಿ ಯುವ ಸಬಲೀಕರಣ ಕೇಂದ್ರ ಸ್ಥಾಪಿಸಿ ಎಷ್ಟು ಜನ ನಿರುದ್ಯೋಗಿಗಳಿಗೆ ಮತ್ತು ವಿದ್ಯಾರ್ಥಿಗಳಿಗೆ ಇಂಟರ್ನ್‌ಶಿಪ್ ತರಬೇತಿ ನೀಡಿ ಉದ್ಯೋಗ ಒದಗಿಸಲಾಗಿದೆ; (ವಿವರ ನೀಡುವುದು) | ರಾಜ್ಯದ ಜಿಲ್ಲೆಯ ಯುವ ಸಬಲೀಕರಣ ಕೇಂದ್ರ (ಯುವ ಸ್ಪಂದನ ಕೇಂದ್ರ) ದಲ್ಲಿ ನಿರುದ್ಯೋಗಿಗಳಿಗೆ ಉದ್ಯೋಗವನ್ನು ಹೊರತುಪಡಿಸಿ 394074 ಯುವಕರು ಮತ್ತು 397301 ಯುವತಿಯರು ಸೇರಿದಂತೆ ಒಟ್ಟು 791375 ಯುವಜನರಿಗೆ ಮಾರ್ಗದರ್ಶನ (Counseling) ವನ್ನು ನೀಡಲಾಗಿದೆ. |
| (ಈ) | ನಿರುದ್ಯೋಗಿಗಳನ್ನು ಗುರುತಿಸಿ ಯುವ ಸಬಲೀಕರಣ ಕೇಂದ್ರದ ಮೂಲಕ ಅಗತ್ಯ ತರಬೇತಿಗಳನ್ನು ನೀಡಿ ಅವರ ಕೌಶಲ್ಯಕ್ಕನುಗುಣವಾಗಿ ಉದ್ಯೋಗಗಳನ್ನು ದೊರಕಿಸಿಕೊಡಲು ಸರ್ಕಾರವು ಹಮ್ಮಿಕೊಂಡಿರುವ ಬೇರೆ ಬೇರೆ ಕಾರ್ಯಕ್ರಮಗಳೇನು? (ವಿವರ ನೀಡುವುದು) | ನಿರುದ್ಯೋಗಿಗಳನ್ನು ಗುರುತಿಸಿ ಯುವ ಸಬಲೀಕರಣ ಕೇಂದ್ರದ ಮೂಲಕ ಕೌಶಲ್ಯಕ್ಕನುಗುಣವಾಗಿ ಉದ್ಯೋಗಗಳನ್ನು ದೊರಕಿಸಿಕೊಡುವ ಯಾವುದೇ ಕ್ರಮಗಳು ಇರುವುದಿಲ್ಲ. ಆದರೆ, ಅವರಲ್ಲಿ ಕೌಶಲ್ಯಾಭಿವೃದ್ಧಿ ಯೋಜನೆಗಳ ಬಗ್ಗೆ ಅರಿವು ಮೂಡಿಸಿ, ಕೌಶಲ್ಯ ತರಬೇತಿ ಪಡೆಯಲು ಪ್ರೇರೇಪಿಸಲಾಗುತ್ತಿದೆ. |

**ವೈಎಸ್‌ಡಿ/ಇಬಿಬಿ/196/2021**

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು
ಕ್ರೀಡಾ ಸಚಿವರು.